# ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದನ್ನು ಕಲಿಸುವುದು : ಅನುಕ್ರಮವಾಗಿಯೋ ಅಥವಾ ಏಕಕಾಲಿಕವಾಗಿಯೋ?

ಅನೇಕ ಶಿಕ್ಷಕರು ಮಕ್ಕಳಿಗೆ ಭಾಷೆಯನ್ನು ಅನುಕ್ರಮವಾಗಿ ಕಲಿಸಬೇಕೆಂದು ನಂಬುತ್ತಾರೆ. ಅಂದರೆ, ಮೊದಲು ಆಲಿಸುವುದು (L), ನಂತರ ಮಾತನಾಡುವುದು (S), ತದನಂತರ ಓದುವುದು (R) ಮತ್ತು ಕೊನೆಯದಾಗಿ, ಬರೆಯುವುದು (W). ಇವೆಲ್ಲವನ್ನೂ ಏಕಕಾಲಕ್ಕೆ ಕಲಿಸುವಂತೆ ಹೇಳಿದರೆ ಅವರಿಗೆ ಗೊಂದಲವಾಗುತ್ತದೆಯಲ್ಲದೆ, ಚಿಂತೆಗೀಡಾಗುತ್ತಾರೆ. ಚಿಕ್ಕ ಮಕ್ಕಳು ಓದುವುದು ಮತ್ತು ಬರೆಯುವುದನ್ನು ಕಲಿಯುವ ಮೊದಲು ಅವರಿಗೆ ಆಲಿಸುವುದು ಮತ್ತು ಮಾತನಾಡುವುದನ್ನು ಕಲಿಸಬೇಡವೇ? ಅವರು ಬರೆಯುವ ಮೊದಲು ಓದುವುದನ್ನು ಕಲಿಯಬೇಡವೇ?

ಚಿಕ್ಕ ಮಕ್ಕಳ ಭಾಷೆ ಮತ್ತು ಸಾಕ್ಷರತೆಯ ವಿಕಾಸದ ಬಗೆಗಿನ ಅಧ್ಯಯನಗಳಿಂದ ನಮಗೆ ತಿಳಿಯುವುದೇನೆಂದರೆ, ಮಕ್ಕಳನ್ನು LSRW ಸಾಮರ್ಥ್ಯಗಳೊಂದಿಗೆ ಏಕಕಾಲದಲ್ಲಿ ಪ್ರವೃತ್ತಗೊಳಿಸತಕ್ಕದ್ದು. ಏಕೆಂದರೆ ಈ ಎಲ್ಲಾ ಸಾಮರ್ಥ್ಯಗಳು ಹೆಚ್ಚಿನ ಅಂತರ್-ಸಂಬಂಧವನ್ನೂ ಪರಸ್ಪರ ಅವಲಂಬನೆಯನ್ನೂ ಹೊಂದಿವೆ. ಎಲ್ಲಕ್ಕಿಂತ ಹೆಚ್ಚಾಗಿ, ಅರ್ಥ ನಿರ್ಮಾತೃಗಳಾಗಿ ಮತ್ತು ಸಂಕೇತಗಳನ್ನು ಬಳಸುವವರಾಗಿ ಮಕ್ಕಳಿಗಿರುವ ಮೂಲಭೂತ ವಿಕಾಸಾತ್ಮಕ ಸಾಮರ್ಥ್ಯಗಳನ್ನು ಇವು ಆಧರಿಸಿವೆ (ಡೈಸನ್, 1990; ಸುಲ್‌ಸ್‌ಬೀ ಮತ್ತು ಟಿಯಲೆ, 1998; ವೆಲ್ಸ್ 2009).

ಈ ಕೆಳಗಿನ ಸಂಭಾಷಣೆಯಲ್ಲಿ, ಒಬ್ಬ ಸುಗಮಕಾರರೊಬ್ಬರು [facilitator (F)], 'LSRW ಕೌಶಲವನ್ನು ಚಿಕ್ಕ ಮಕ್ಕಳಿಗೆ ಏಕಕಾಲದಲ್ಲಿ ಕಲಿಸುವುದರ ಬಗೆಗಿನ' ಅಭ್ಯಾಸನಿರತ ಶಿಕ್ಷಕರ ಗುಂಪಿನ (P) ಪ್ರಶ್ನೆಗಳನ್ನು ನಿರ್ವಹಿಸುತ್ತಾರೆ.

F: ನಾವೆಲ್ಲ ನಮ್ಮ ಮೊದಲ ಭಾಷೆಯನ್ನು ಹೇಗೆ ಕಲಿತೆವು?

P: ನಮ್ಮ ಪರಿಸರದಲ್ಲಿ ಬೇರೆ ಜನರು ಮಾತನಾಡುವುದನ್ನು ಕೇಳಿಸಿಕೊಂಡು ಕಲಿತೆವು.

F: ಸರಿ. ಹಾಗಾದರೆ ನಾವು ೧೮ ತಿಂಗಳ ಕಾಲ ಒಂದು ಶಿಶುವನ್ನು ಪರಸ್ಪರ ಮಾತನಾಡುತ್ತಿರುವ ಜನರಿರುವ ಪರಿಸರದಲ್ಲಿರುವಂತೆ ಮಾಡೋಣ. ಮಗು ಹುಟ್ಟಿದಾಗಿನಿಂದ ೧೮ ತಿಂಗಳಾಗುವವರೆಗೆ ಬೇರೆಯವರು ಆಡುವ ಮಾತುಗಳನ್ನು ಕೇಳುತ್ತಿರಬೇಕು. ಮಗು ತಾನೇ ಯಾವ ರೀತಿಯ ಶಬ್ದವನ್ನೂ ಮಾಡುವಂತಿಲ್ಲ, ಯಾವ ಪದಗಳನ್ನೂ ಆಡುವಂತಿಲ್ಲ. ಹಾಗಿದ್ದಾಗ ಮಗು ಭಾಷೆಯನ್ನು ಕಲಿಯಬಲ್ಲದೆ?

P: ಇಲ್ಲ!

F: ಏಕೆ?

P: ಮಗುವು ತನ್ನಿಂದ ತಾನೇ ಸುತ್ತಮುತ್ತ ಕೇಳಿಸುವ ಭಾಷೆಯ ಶಬ್ದಗಳನ್ನು ಮಾಡಲು ಪ್ರಯತ್ನಿಸುತ್ತದೆ! ಮಗುವನ್ನು ಬರೀ ಕೇಳಿಸಿಕೋ, ಪ್ರತಿಕ್ರಿಯಿಸಬೇಡ ಎಂದು ಹೇಳಲು ಸಾಧ್ಯವಿಲ್ಲ!

F: ಹೌದು. ನೀವು ಹೇಳಿದ್ದು ಸರಿಯಾಗಿದೆ. ಮಗು ಅನೇಕ ವಿಧವಾಗಿ ಪ್ರತಿಕ್ರಿಯಿಸಿದಾಗ ಮಾತ್ರ ಬೆಳವಣಿಗೆಯಲ್ಲಿ ಪ್ರಗತಿಯನ್ನು ಕಾಣುವುದು ಸಾಧ್ಯ. ಸ್ವ ಪ್ರಯತ್ನವಿಲ್ಲದೆ ಜಡವಾಗಿರುವುದರಿಂದ ಕಲಿಯಲು ಮತ್ತು ಬೆಳೆಯಲು ಸಾಧ್ಯವಿಲ್ಲ.

ಈಗ ನಾವು ಭಾಷೆಯ ಬೆಳವಣಿಗೆಯ ಬಗ್ಗೆ ಮಾತನಾಡೋಣ - ಭಾಷೆ ಎನ್ನುವುದು ಒಂದು ಸಂದರ್ಭದೊಳಗೆ/ಸನ್ನಿವೇಶದೊಳಗೆ ಕಲಿಯುವಂಥದ್ದು. ಭಾಷೆಯನ್ನು ಕಲಿಯುತ್ತಿರುವ ಸಂದರ್ಭದಲ್ಲಿ ಮಗುವು ಬರೀ ಆಡುತ್ತಿರುವ ಭಾಷೆಯನ್ನು ಅಥವಾ ಪದಗಳನ್ನು ಮಾತ್ರ ಕೇಳಿಸಿಕೊಳ್ಳುತ್ತಿರುವುದಿಲ್ಲ. ಅದೇ ಸಮಯದಲ್ಲಿ ಮಗುವು ಪ್ರತಿಯೊಂದು ಪದದ ಅರ್ಥವನ್ನು ತಿಳಿಯಲು ಮತ್ತು ಅದನ್ನು ತನ್ನ ಜೀವನ ಹಾಗೂ ಪರಿಸರಕ್ಕೆ ಹೊಂದಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ಮಗುವು ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು, ತನ್ನ ಸುತ್ತಲಿನ ವಸ್ತುಗಳನ್ನು ಗಮನಿಸಲು ಮತ್ತು ಅನ್ವೇಷಿಸಲು, ತನ್ನ ಎಲ್ಲಾ ಇಂದ್ರಿಯಗಳನ್ನೂ ಉಪಯೋಗಿಸಿಕೊಂಡು ತನ್ನ ಸುತ್ತಲಿನ ಪ್ರಪಂಚವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ಈ ರೀತಿ ಮಾಡುತ್ತಲೇ, ಅದೇ ಸಮಯದಲ್ಲಿ ಮಗುವು "ಸಂಭಾಷಣೆಯಗಳಲ್ಲಿಯೂ ಭಾಗಿಯಾಗಲು" ಯತ್ನಿಸುತ್ತದೆ, ಅಂದರೆ ತಾನೂ ಮಾತನಾಡಲು ಪ್ರಯತ್ನಿಸುತ್ತದೆ.

ದೊಡ್ಡ ಮಕ್ಕಳಂತೆ ಅಥವಾ ದೊಡ್ಡವರಂತೆ ಇನ್ನೂ ಮಾತನಾಡಲು ಬರದಿದ್ದರೂ ಚಿಕ್ಕ ಮಕ್ಕಳು ತಮ್ಮ ಅವಶ್ಯಕತೆಗಳನ್ನು ವಯಸ್ಕರಿಗೆ ತಿಳಿಸುವ, ಒತ್ತಾಯಿಸುವ ಇತ್ಯಾದಿ ಪ್ರಯತ್ನಗಳನ್ನು ಮಾಡುವುದನ್ನು ನೀವು ನೋಡಿರಬಹುದು. ಚಿಕ್ಕ ಮಕ್ಕಳು ತಮ್ಮ ಮುಗುಳ್ನಗೆ, ಸನ್ನೆಗಳು ಮತ್ತು ತೊದಲ್ನುಡಿಗಳ ಮೂಲಕ ತಮ್ಮ ಸುತ್ತಮುತ್ತ ಇರುವ ಇತರರೊಂದಿಗೆ ಸಂವಹನ ನಡೆಸುತ್ತದೆ. ಆದ್ದರಿಂದ ಮಗುವಿಗೆ ಪಾರಂಪರಿಕವಾದ "ಭಾಷೆಯನ್ನು" ಆಡಲು ಬರದಿದ್ದರೂ ಸಹ ಅದರ ತೊದಲುನುಡಿಗಳು ಮತ್ತು ಸ್ವರಗಳನ್ನು ಹೊರಡಿಸುವುದು - ಇವೆಲ್ಲವೂ ಮಗುವು ಇತರರ ಗಮನ ಸೆಳೆಯುವ, ತನಗೇನು ಬೇಕೆಂದು ತಿಳಿಸುವ, ಅಥವಾ ಪ್ರತಿಕ್ರಿಯೆ ನೀಡುವ ವಿಧಾನಗಳು. ಕೆಲವು ಪದಗಳನ್ನು ಸೃಜಿಸಲು ಸಾಧ್ಯವಾಗುತ್ತಿದ್ದಂತೆಯೇ ಮಗುವು ಅದಾಗಲೇ ಸಂಭಾಷಣೆ ನಡೆಸುತ್ತಿರುತ್ತದೆ. ಈ ರೀತಿಯಾಗಿ, ಕೇವಲ ಆಲಿಸುವುದು ಮತ್ತು 'ಮಾತನಾಡುವುದು' (ಅಭಿವ್ಯಕ್ತಿ ಪಡಿಸುವುದು) ಮಾತ್ರವಲ್ಲ, ತನ್ನ ಪರಿಸರದಲ್ಲಿರುವ ಜನಗಳು, ವಸ್ತುಗಳು ಮತ್ತು ವಿಚಾರಗಳೊಂದಿಗೆ ತೊಡಗಿಕೊಳ್ಳುವ ಪ್ರಕ್ರಿಯೆಯೂ ಒಟ್ಟೊಟ್ಟಿಗೆ ನಡೆಯುತ್ತದೆ.

ಒಂದು ಭಾಷೆಯನ್ನು ಕಲಿಯಲು ಮಗುವು ಸಕ್ರಿಯ ಪಾತ್ರವನ್ನು ವಹಿಸುತ್ತದೆ. ಆದ್ದರಿಂದ ನಾವು ಮಗುವು ಭಾಷೆಯನ್ನು ಕೇವಲ ಆಲಿಸುವುದರಿಂದ ಕಲಿಯುತ್ತದೆ ಎಂದರೆ, ಆಗ, ಭಾಷೆಯ ಕಲಿಕೆಯು ಒಂದು ಸಂಕೀರ್ಣವಾದ ಸಂಜ್ಞಾನಾತ್ಮಕ ಚಟುವಟಿಕೆ ಎನ್ನುವುದನ್ನು ಗೌಣ ಮಾಡಿದಂತಾಗುತ್ತದೆ. ಜೊತೆಗೆ, ಅನ್ವೇಷಣೆ ಮತ್ತು ಬೆಳವಣಿಗೆಯ ಬೃಹತ್ ಪ್ರಕ್ರಿಯೆಯ ಒಂದು ಭಾಗವಾದ ಭಾಷೆಯ ಕಲಿಕೆಯಲ್ಲಿನ ಮಗುವಿನ ಶ್ರಮವನ್ನು 'ಅಲ್ಪ'ವೆಂಬುದಾಗಿ ಪರಿಗಣಿಸಿದಂತಾಗುತ್ತದೆ. ಆದ್ದರಿಂದ ನಾವು ಕೇವಲ ಆಲಿಸುವುದರಿಂದಲೇ ಭಾಷೆಯ ಕಲಿಕೆ ಎಂದು ಹೇಳಲಾಗುವುದಿಲ್ಲ.

ಪದಗಳ ಕಲಿಕೆಯು ಆ ಪದಗಳ ಅರ್ಥವೇನೆಂಬುದನ್ನು ಗ್ರಹಿಸುವ ಪ್ರಕ್ರಿಯೆಯನ್ನು ಒಳಗೊಂಡಿರುತ್ತದೆ ಎಂಬುದನ್ನು ನಾವು ಅರ್ಥಮಾಡಿಕೊಂಡಾಗ, ಇದನ್ನು ಇನ್ನೂ ಉತ್ತಮವಾಗಿ

ಗ್ರಹಿಸಬಹುದು. ಅಂದರೆ, ಮಗುವು ಭಾಷೆಯ ಜೊತೆಗೇ ಪರಿಕಲ್ಪನೆಗಳ ತಿಳುವಳಿಕೆಯನ್ನೂ ಹೊಂದುತ್ತಿರುತ್ತದೆ.

ಕೆಲವು ಉದಾಹರಣೆಗಳನ್ನು ಗಮನಿಸೋಣ.

**ಉದಾಹರಣೆ** 1: ಒಂದು 10 ತಿಂಗಳ ಮಗುವು, ಹಾಲು ಮತ್ತು ನೀರು ಎರಡಕ್ಕೂ "ಜೀಜೀ" ಅನ್ನುತ್ತದೆ ಎಂದಿಟ್ಟುಕೊಳ್ಳೋಣ. ಮಗು 'ಜೀಜೀ' ಎಂದಾಗ ತಾಯಿ ಮಗುವಿನ ಹಾಲಿನ ಶೀಶೆಗೆ ಹಾಲು (ಬಿಳಿಯ ದ್ರವ) ಹಾಕತೊಡಗುತ್ತಾಳೆ. ಅದನ್ನು ನೋಡಿದ ಮಗುವು ಕೂಡಲೇ ಬಾಯಿಂದ ಶಬ್ದ ಮಾಡುವುದು, ತಲೆ ಆಡಿಸುವುದು, ಕೈಯ್ಯಾಡಿಸುವುದು ಇತ್ಯಾದಿ ಸನ್ನೆಗಳಿಂದ ತನಗೆ ಬೇಕಾಗಿರುವುದು ಈ "ಜೀಜೀ ಅಲ್ಲ ಇನ್ನೊಂದು ಎಂದು ತಿಳಿಯಪಡಿಸುತ್ತದೆ. ನೀರಿನ ಕಡೆಗೆ ತೋರಿಸುತ್ತದೆ. ಆಗ ತಾಯಿ "ನೀರು" ಎನ್ನುತ್ತಾಳೆ. ಇಲ್ಲಿ ಗಮನಿಸಬೇಕಾದ ಅಂಶ ಏನೆಂದರೆ, ನೀರು ಮತ್ತು ಹಾಲಿಗೆ ತನ್ನದೇ ಆದ ನಿರ್ದಿಷ್ಟ ಗುಣಗಳಿದ್ದು, ಮಗುವು ಈಗಾಗಲೇ ಅದನ್ನು ಗ್ರಹಿಸಿದೆ. ಅಷ್ಟೇ ಅಲ್ಲದೇ ಈ ಸಮಯದಲ್ಲಿ ಅದಕ್ಕೆ ಬೇಕಾಗಿರುವುದು ನೀರು; ಹಾಲಲ್ಲ ಎನ್ನುವುದೂ ಅದಕ್ಕೆ ತಿಳಿದಿದೆ. ಈ ಎರಡು ದ್ರವ ಪದಾರ್ಥಗಳ ವಿಭಿನ್ನ ಅನುಭವಗಳನ್ನು ಗಮನಿಸುವ, ಹೋಲಿಸುವ ಮತ್ತು ನೆನಪಿಡುವ ಪ್ರಕ್ರಿಯೆಯು ಇದಕ್ಕೆ ಅಗತ್ಯ. ನಂತರ, ಮಗುವು ಬಣ್ಣವಿಲ್ಲದ ದ್ರವಕ್ಕೆ "ನೀರು" ಎಂಬ ಪದವನ್ನು ಸೃಜಿಸುತ್ತದೆ. ಆದರೆ ಪರಿಕಲ್ಪನಾತ್ಮಕ ದೃಷ್ಟಿಯಿಂದ ಮಗುವಿಗೆ ಹಾಲು ಹಾಗೂ ನೀರಿನ ಸ್ವರೂಪಗಳು ಬೇರೆ ಬೇರೆ ಎಂದು ಈಗಾಗಲೇ ತಿಳಿದಿದೆ. ಹಾಲು, ನೀರನ್ನು ಕುರಿತ ಹೆಚ್ಚಿನ ಅನುಭವಗಳನ್ನು ಮಗುವು ಪಡೆಯತೊಡಗಿದಂತೆ, ಇವುಗಳ ಬಗೆಗಿನ ಪರಿಕಲ್ಪನೆಗಳ ವಿಕಾಸವಾಗುತ್ತಾ ಹೋಗುತ್ತದೆ.

**ಉದಾಹರಣೆ** 2: 'ವಾಸು'ವಿಗೆ ಎರಡು ವರ್ಷಗಳಾದಾಗ, ಅವನು ಮಕ್ಕಳ ಪಾಲನಾ ಕೇಂದ್ರಕ್ಕೆ ಹೋಗತೊಡಗಿದ. ಅಲ್ಲಿ ಆರೈಕೆಮಾಡುವ ಹೆಂಗಸನ್ನು ಅವನು 'ಅಜ್ಜಿ' ಎನ್ನುತ್ತಿದ್ದ. ಬಹುಶಃ ಆಕೆ ಸೀರೆ ಉಟ್ಟಿದ್ದರಿಂದ ಇರಬಹುದು. ಈ ಪಾಲನಾ ಕೇಂದ್ರದಲ್ಲಿ ಅವನಿಗೆ ಆರೈಕೆಮಾಡುವಾಕೆಯನ್ನು "ಆಂಟಿ" ಎಂದು ಕರೆಯಲು ತಿಳಿಸಲಾಗಿತ್ತು. ವಾಸು ಮನೆಯಲ್ಲಿ, ತನ್ನ ಅಜ್ಜಿಯನ್ನು "ಆಂಟಿ" ಎಂದು ಕರೆಯಲು ಶುರುಮಾಡಿದ. ಸೀರೆ ಉಟ್ಟವರೆಲ್ಲ "ಅಜ್ಜಿ" ಅಲ್ಲ ಮತ್ತು ತನ್ನ "ಅಜ್ಜಿ" "ಆಂಟಿ" ಅಲ್ಲ ಎಂದು ಅರ್ಥಮಾಡಿಕೊಳ್ಳಲು ಅವನಿಗೆ ಸ್ವಲ್ಪ ಸಮಯ ಹಿಡಿಯಿತು

ಇದನ್ನು ಅರ್ಥಮಾಡಿಕೊಳ್ಳಲು ವಾಸು ಯಾವ ರೀತಿಯ ಸಂಜ್ಞಾನಾತ್ಮಕ ಪ್ರಕ್ರಿಯೆಗೆ ಒಳಗಾಗಿರಬಹುದೆಂದು ಊಹಿಸಿ. ಇದೊಂದು ಸರಳವಾದ ಸಂಯೋಜನೆಯಾಗಿದ್ದರೆ ವಾಸುವಿಗೆ ಈ ರೀತಿ ಗೊಂದಲವಾಗುತ್ತಿರಲಿಲ್ಲ. ಪದಗಳನ್ನು ಸಮಂಜಸವಾಗಿ ಬಳಸಲು ಕಲಿಯುವುದು ಮಗುವಿನ ಬಹುದೊಡ್ಡ ಸಂಜ್ಞಾನಾತ್ಮಕ ಚಟುವಟಿಕೆಯ ಒಂದು ಭಾಗವಾಗಿದೆ. ಪದಗಳನ್ನು ಗ್ರಹಿಸುವುದು ಈ ಸಮಗ್ರ ಅನ್ವೇಷಣೆಯ ಕೇವಲ ಒಂದು ಹಂತವಷ್ಟೆ.

**ಉದಾಹರಣೆ** 3: ಒಂದು ಮಗು ಮೇಲ್ಸೇತುವೆಯನ್ನು ನೋಡಿ ಅದರ ಹೆಸರನ್ನು ಕಲಿತ ನಂತರ ಅದನ್ನು ಕುರಿತೇ ಯೋಚಿಸತೊಡಗಿದ. ಮನೆಯಲ್ಲಿ ಅವನು ಮಾಡಿದ ಮೇಲ್ಸೇತುವೆಯ ಮಾದರಿಯನ್ನು (ಚಿತ್ರ 1) ನೋಡಿ.!

ಚಿತ್ರ 1



ಈ ರೀತಿಯಾಗಿ ಮಕ್ಕಳು ಭಾಷೆಯನ್ನು ಕಲಿಯುವಾಗ ಕೇವಲ ಪದಗಳನ್ನು ಮತ್ತು ವ್ಯಾಕರಣವನ್ನಷ್ಟೇ ಕಲಿಯುತ್ತಿರುವುದಿಲ್ಲ. ಭಾಷೆಯೊಂದಿಗೆ ಹಾಗೂ ಭಾಷೆಯ ಮೂಲಕ ಆಲೋಚನೆ ಮಾಡಿ, ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಪ್ರಪಂಚದೊಂದಿಗಿನ ಸಂಬಂಧದ ಗ್ರಹಿಕೆ ಮತ್ತು ಆ ಕುರಿತ ತಿಳುವಳಿಕೆಯನ್ನು ಕಲಿಯುತ್ತಾರೆ. ಮಕ್ಕಳು ಆಡುವ ಮಾತುಗಳು, ಕೇಳುವ ಪ್ರಶ್ನೆಗಳು, ಕಲ್ಪಿಸುವ ಆಟಗಳು, ವಹಿಸುವ ಪಾತ್ರಗಳು, ಬರೆಯುವ ಚಿತ್ರಗಳು, ರೂಪಿಸುವ ವಸ್ತುಗಳು, ಕೇಳುವ, ಓದುವ ಅಥವಾ ಬರೆಯುವ ಕಥೆಗಳು ಇತ್ಯಾದಿಗಳಿಂದ ಮಕ್ಕಳು ಪ್ರಪಂಚದ ಬಗೆಗೆ ತಿಳುವಳಿಕೆ ಪಡೆಯಲು ನಡೆಸುತ್ತಿರುವ ಸಕ್ರಿಯ ಪ್ರಯತ್ನವು ಪ್ರಕಟವಾಗುತ್ತದೆ.

**ಚಟುವಟಿಕೆ** : ಒಂದರಿಂದ ಮೂರು ವರ್ಷದವರೆಗಿನ ಮಕ್ಕಳನ್ನು ಗಮನಿಸಿ. ನೀವು ಗಮನಿಸಿದ ಅಂಶಗಳನ್ನು ಬರೆದಿಡಿ. ಈ ಅಂಶಗಳನ್ನು ಭಾಷೆಯನ್ನು ಕಲಿಯುವ ಪ್ರಕ್ರಿಯೆಗೆ ಸಂಬಂಧಪಟ್ಟಂತೆ ವಿಶ್ಲೇಷಿಸಿ.

F: ಈಗ ನಾವು ಶಾಲೆಯಲ್ಲಿ ಭಾಷೆಯನ್ನು ಕಲಿಸುವ ಬಗೆಗೆ ಯೋಚಿಸೋಣ. ಶಾಲೆಯಲ್ಲಿ ಕಲಿಸಿದ ಭಾಷೆಯನ್ನು ಮಗು ಕಲಿತಿದೆ ಎಂದು ನಾವು ಯಾವಾಗ ಹೇಳುತ್ತೇವೆ?

P: ಆ ಭಾಷೆಯಲ್ಲಿ ಮಗು ಓದಲು, ಬರೆಯಲು ಮತ್ತು ಗ್ರಹಿಸಲು ಮತ್ತು ಮಾತನಾಡಲು (ಸಂಭಾಷಣೆ ನಡೆಸಲು) ಶಕ್ತವಾದಾಗ.

F: ಹಾಗಾದರೆ, ಅವರು ಇದನ್ನು ಹೇಗೆ ಕಲಿಯುತ್ತಾರೆ?

P: ಆಲಿಸುವುದು, ಮಾತನಾಡುವುದು ಮತ್ತು ಆಲೋಚಿಸುವುದು ಏಕಕಾಲದಲ್ಲಿ ನಡೆಯುತ್ತದೆ ಎಂದು ಮನವರಿಕೆ ಮಾಡಿದ್ದೀರಿ. ಆದರೂ ನಮಗೆ ಆಲಿಸುವುದು ಮತ್ತು ಮಾತನಾಡುವ ಪ್ರಕ್ರಿಯೆಗಳು ಓದುವುದು ಮತ್ತು ಬರೆಯುವದಕ್ಕಿಂತ ಮೊದಲು, ಮತ್ತು ಓದುವುದನ್ನು ಕಲಿತ ನಂತರ ಬರೆಯುವ ಪ್ರಕ್ರಿಯೆಯು ಅವಶ್ಯವೆಂಬುದು ನಮ್ಮ ನಂಬಿಕೆ.

F: ನೀವು ಹೇಳುವುದು ಸರಿಯಾಗಿದೆ. ಒಂದು ಮಗು ಹೊಸ ಭಾಷೆಯನ್ನು ಕಲಿಯುವಾಗ ಸ್ವಲ್ಪಮಟ್ಟಿನ ಆಲಿಸುವ ಮತ್ತು ಮಾತನಾಡುವ ಪ್ರಕ್ರಿಯೆಗಳು ಓದುವುದು ಮತ್ತು ಬರೆಯುವುದಕ್ಕಿಂತ ಮೊದಲು ನಡೆಯುತ್ತವೆ. ಆದರೆ, ನಾನು ಒಂದು ವಿಷಯದ ಬಗೆಗೆ ನಿಮ್ಮ ಗಮನಸೆಳೆಯ ಬಯಸುತ್ತೇನೆ. ಮಕ್ಕಳು ಶಾಲೆಗೆ ಬಂದಾಗ, ವಿದ್ಯಾವಂತರ ಕುಟುಂಬದಿಂದ ಬಂದ ಮಕ್ಕಳಿಗೂ ಅನಕ್ಷರಸ್ಥ ಕುಟುಂಬದಿಂದ ಬಂದ ಮಕ್ಕಳಿಗೂ ವ್ಯತ್ಯಾಸವಿರುತ್ತದೆ. ಆ ಮಕ್ಕಳು ಇನ್ನೂ ಓದಲು ಅಥವಾ ಬರೆಯಲು ಕಲಿತಿರದಿದ್ದರೂ ಸಹ ಈ ಎರಡು ಬಗೆಯ ಕುಟುಂಬದಿಂದ ಬಂದ ಮಕ್ಕಳಲ್ಲಿ ವ್ಯತ್ಯಾಸವಿರುತ್ತದೆ.

P: ಹ್ಞಾ, ದೊಡ್ಡ ವ್ಯತ್ಯಾಸಗಳೇ ಇರುತ್ತವೆ!

F: ಹೌದು. ಏಕೆಂದರೆ ಅಕ್ಷರಸ್ಥ ಕುಟುಂಬದಿಂದ ಬಂದ ಮಕ್ಕಳು ಈಗಾಗಲೇ ಓದುವುದು ಮತ್ತು ಬರೆಯುವುದರ ಬಗ್ಗೆ ಬಹಳಷ್ಟು ಕಲಿತಿರುತ್ತಾರೆ. ಅವರು ಅಕ್ಷರಗಳನ್ನು ಮತ್ತು ಪದಗಳನ್ನು ಓದಿ ಬರೆದು ಮಾಡುವ ಮೊದಲೇ ಈ ಕಲಿಕೆ ಆಗಿರುತ್ತದೆ! ಜೀವನದಲ್ಲಿ ಮುದ್ರಣದ ಉಪಯೋಗವಿದೆ ಎಂದು ಕಲಿತಿರುತ್ತಾರಲ್ಲದೆ, ತಮ್ಮ ಸುತ್ತಲಿನ ಹಿರಿಯರು (ವಯಸ್ಕರು) ಹೇಗೆ ತಮ್ಮ ಜೀವನದಲ್ಲಿ ಮುದ್ರಣವನ್ನು ವಿವಿಧ ರೀತಿಯಲ್ಲಿ ಬಳಸುತ್ತಾರೆ ಎನ್ನುವುದರ ಬಗೆಗೂ ಕಲಿತಿರುತ್ತಾರೆ (ಉದಾ: ದಿನಪತ್ರಿಕೆ ಓದಲು, ಚಿನ್ಹೆಗಳನ್ನು ಓದಲು, ಪಟ್ಟಿ ಮಾಡಲು, ಅರ್ಜಿಗಳನ್ನು ತುಂಬಲು ಇತ್ಯಾದಿ.). ಮುದ್ರಿತ ವಿಷಯಗಳ ಬಗ್ಗೆ ಅನೇಕ ವಿಷಯಗಳನ್ನು ಸಹ ಕಲಿತಿರುತ್ತಾರೆ. ಉದಾ: ಮುದ್ರಿತ ವಿಷಯವು ಯಾವ ದಿಕ್ಕಿನಿಂದ ಯಾವ ದಿಕ್ಕಿನತ್ತ ಸಾಗುತ್ತದೆ, ಅದನ್ನು ಅರ್ಥಮಾಡಿಕೊಳ್ಳಲು ಹೇಗೆ ಓದಬೇಕು, ಇತ್ಯಾದಿ. ಆದ್ದರಿಂದ, ಮಕ್ಕಳು ಪಾರಂಪರಿಕವಾಗಿ ಓದಲು ಬರೆಯಲು ಕಲಿತಿದ್ದಾರೆ ಎಂದು ಹೇಳಲು ಆಗದಿದ್ದರೂ ಸಹ ಅವರು ಆಲಿಸಲು ಮತ್ತು ಮಾತನಾಡಲು ಕಲಿಯುತ್ತಿರುವಾಗಲೇ ಓದಲು ಮತ್ತು ಬರೆಯಲು ಕಲಿಯುವುದನ್ನು ಆರಂಭಿಸಿರುತ್ತಾರೆ!

F: ಈಗ ನಾವು ಶಾಲೆಯಲ್ಲಿ ಓದುವುದನ್ನು ಹೇಗೆ ಕಲಿಸುತ್ತೇವೆ ಎಂದು ಗಮನಿಸೋಣ - ನೀವು ಶಾಲೆಯಲ್ಲಿ ಮಕ್ಕಳಿಗೆ ಓದುವುದು ಮತ್ತು ಬರೆಯುವುದನ್ನು ಹೇಗೆ ಪರಿಚಯಿಸುವಿರಿ?

P: ಓದುವುದನ್ನು ಶುರುಮಾಡಲು ಮಕ್ಕಳು ಅಕ್ಷರಗಳನ್ನು ಗುರುತಿಸತಕ್ಕದ್ದು. ಪದಗಳು ಮತ್ತು ವಾಕ್ಯಗಳನ್ನು ಓದಬೇಕು.

F: ಬರೆಯುವುದು ಎಂದರೇನು?

P: ಒಮ್ಮೆ ಮಕ್ಕಳು ಅಕ್ಷರಗಳನ್ನು ಗುರುತಿಸಲು ಕಲಿತರೆ, ಅವನ್ನು ಬರೆಯಬಲ್ಲರು. ನಂತರ ಪದಗಳನ್ನು, ತದನಂತರದಲ್ಲಿ ವಾಕ್ಯಗಳನ್ನು ಬರೆಯಲು ಕಲಿಯುತ್ತಾರೆ. ಆದ್ದರಿಂದ, ಮೊದಲು ಅವರು ಅಕ್ಷರಗಳನ್ನು ಗುರುತಿಸಲು ಕಲಿತು, ನಂತರ ಬರೆಯಬೇಕು.

F: ಓದುವುದು ಮತ್ತು ಬರೆಯುವುದರ ಉದ್ದೇಶವೇನು?

P: ಮಕ್ಕಳು ಬರೆದಿರುವುದನ್ನು ಅರ್ಥಮಾಡಿಕೊಳ್ಳಲು ಮತ್ತು ತಮ್ಮ ಆಲೋಚನೆಗಳನ್ನು ಬರವಣಿಗೆಯಲ್ಲಿ ವ್ಯಕ್ತಪಡಿಸಲೂ ಸಹ ಸಮರ್ಥರಾಗಬೇಕು.

F: ವರ್ಣಮಾಲೆಯ ಅಕ್ಷರಗಳನ್ನು ಕಲಿಯಲು ಮಕ್ಕಳು ಎಷ್ಟು ಸಮಯ ತೆಗೆದುಕೊಳ್ಳುತ್ತಾರೆ? ನೀವು ಮಕ್ಕಳಿಗೆ ಯಾವಾಗ ಪದಗಳನ್ನು ಬರೆಯುವುದನ್ನು ಕಲಿಸಲು ಆರಂಭಿಸುವಿರಿ? ಹೇಗೆ?

P: ಮೊದಲು ಮೂರು ತಿಂಗಳು ನಾವು ಮಕ್ಕಳಿಗೆ ವರ್ಣಮಾಲೆಯ ಅಕ್ಷರಗಳನ್ನು ಅಭ್ಯಾಸ ಮಾಡಲು ಸಹಾಯ ಮಾಡುತ್ತೇವೆ. ನಂತರ ಮಾತ್ರೆಗಳು ಇಲ್ಲದಿರುವ ಸರಳ ಪದಗಳು ನಂತರ ಮಾತ್ರೆಗಳು ಇರುವ ಪದಗಳು ಅದಾದ ಮೇಲೆ ಸಣ್ಣ ವಾಕ್ಯಗಳನ್ನು ಕೊಡುತ್ತೇವೆ.

F: ಅಕ್ಷರಗಳಿಗೆ ಏನಾದರೂ ಅರ್ಥವಿದೆಯೇ?

P: ಇಲ್ಲ. ಆದರೆ ಮಕ್ಕಳು ಅಕ್ಷರಗಳನ್ನು ಸೇರಿಸಿ ಪದಗಳನ್ನು ಮಾಡಿದಾಗ, ಅವರು ಆ ಪದಗಳ ಅರ್ಥವನ್ನು ತಿಳಿಯುತ್ತಾರೆ.

F: ನಾವು ಈ ಹಿಂದೆಯೇ ಅನ್ವೇಷಣೆ, ಪ್ರಯೋಗಗಳು ಹಾಗೂ ತನಗೆ ಸಾಧ್ಯವಿರುವ ಎಲ್ಲ ಪ್ರಯತ್ನಗಳ ಮೂಲಕ ಮಕ್ಕಳು ತಮ್ಮ ಸುತ್ತಲಿನ ಪರಿಸರವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ ಎನ್ನುವ ವಿಚಾರವನ್ನು ಚರ್ಚೆ ಮಾಡಿದ್ದೇವೆ.

ಈ ರೀತಿಯಾಗಿ ಅನ್ವೇಷಣೆ ಮತ್ತು ಅರ್ಥಗಳ ಸೃಜನೆಯಲ್ಲಿ ಮಗ್ನವಾಗಿದ್ದ ಮಗುವು ಶಾಲೆಯನ್ನು ಪ್ರವೇಶಿಸಿದ ನಂತರ ಒಮ್ಮಿಂದೊಮ್ಮೆಲೆ ಮೂರು ಅಥವಾ ನಾಲ್ಕು ಅಥವಾ ಆರು ತಿಂಗಳುಗಳ ಕಾಲ ಯಾವುದೇ

ಅರ್ಥಗಳಿಲ್ಲದ ಅಕ್ಷರಗಳನ್ನು ಕಲಿಯುವುದರಲ್ಲಿ ತೊಡಗಬೇಕೆ? ತಾವು ಓದಿ ಬರೆದ ಪದಗಳ ಅರ್ಥದ ವಾಸ್ತವಿಕ ಗ್ರಹಿಕೆಗೆ ನಾವು ಅನೇಕ ತಿಂಗಳುಗಳವರೆಗೆ ಅವರನ್ನು ಏಕೆ ಕಾಯಿಸಬೇಕು?

ಚಟುವಟಿಕೆ: ಮಗು ತನ್ನ ದಿನನಿತ್ಯದ ಬದುಕಿನಲ್ಲಿ ಈಗಾಗಲೇ ಉಪಯೋಗಿಸುತ್ತಿರುವ ವಾಕ್ಯಗಳ ಪಟ್ಟಿ ಮಾಡಿ. ಇವುಗಳಲ್ಲಿ ಎಷ್ಟು ಪದಗಳಿಗೆ ಮಾತ್ರೆಗಳು ಇಲ್ಲವೆಂಬುದನ್ನು ಗಮನಿಸಿ.

ಸಂಕ್ಷಿಪ್ತವಾಗಿ ಹೇಳಬೇಕಾದರೆ, ಮೊದಲು ಅಕ್ಷರಗಳು, ನಂತರ ಪದಗಳು ಮತ್ತು ಆಮೇಲೆ ವಾಕ್ಯಗಳು, ಈ ರೀತಿ ಅನುಕ್ರಮದಲ್ಲಿ ಭಾಷೆಯನ್ನು ಕಲಿಸುವ ಇಡೀ ಪ್ರಕ್ರಿಯೆಯು ಮಕ್ಕಳ ಸಂಜ್ಞಾನಾತ್ಮಕ ಸಾಮರ್ಥ್ಯವನ್ನು ಅಪಮೌಲ್ಯೀಕರಿಸುತ್ತದೆ (undervalue). ಈ ಕಾರ್ಯವಿಧಿಯಲ್ಲಿ, ಅರ್ಥಪೂರ್ಣ ಪ್ರಕ್ರಿಯೆ ಎಂಬ ನಿಟ್ಟಿನಲ್ಲಿ ಬರೆಯುವ ಕ್ರಿಯೆಯನ್ನು ಅನುಸರಿಸುವಲ್ಲಿ ಮಕ್ಕಳು ಆಸಕ್ತಿಯನ್ನು ಕಳೆದುಕೊಳ್ಳಬಹುದು.

F: ಈಗ ನಾವು ಬರೆಯುವುದನ್ನು ಕಲಿಯುವ ಮೊದಲು ಓದುವುದನ್ನು ಕಲಿಯಬೇಕು ಎನ್ನುವ ವಿಷಯದ ಬಗೆಗೆ ವಿಚಾರ ಮಾಡೋಣ. ಈ ನಿಮ್ಮ ಆಲೋಚನೆಯ ಹಿಂದಿನ ಕಾರಣಗಳೇನು?

P: ಮಕ್ಕಳು ಒಮ್ಮೆ ಅಕ್ಷರಗಳನ್ನು ಗುರುತಿಸಿ, ಸಣ್ಣ ಪದಗಳು ಮತ್ತು ವಾಕ್ಯಗಳನ್ನು ಓದಲು ಸಮರ್ಥರಾದರೆ, ಅವರು ಬರೆಯುವುದನ್ನು ಶುರುಮಾಡಬಹುದು.

F: ನೀವು ಅಕ್ಷರ ಕಲಿಸುವ ಮೊದಲೇ ಮಕ್ಕಳು ಬರೆಯುತ್ತಾರೆಯೇ?

P: ಇಲ್ಲ!! ಅಕ್ಷರಗಳೇ ಗೊತ್ತಿಲ್ಲದೇ ಅವರು ಬರೆಯಲು ಹೇಗೆ ಸಾಧ್ಯ?

F: ನೀವು ಮಕ್ಕಳು ಚಿತ್ರ ಬಿಡಿಸುವುದನ್ನು ನೋಡಿದ್ದೀರಾ? ನೀವು ಅವರನ್ನು ಏನು ಬಿಡಿಸಿದ್ದೀಯೆ ಎಂದು ಕೇಳಿದರೆ ಅವರು ಅರ್ಥಪೂರ್ಣವಾದ, ಅನುಕ್ರಮಿಕ ಚಟುವಟಿಕೆಗಳನ್ನು, ವಿವರಣೆಗಳನ್ನು ಅಥವಾ ತಾವೇ ಸೃಷ್ಟಿಸಿದ ಒಂದು ಕಥೆಯನ್ನು ಹೇಳುತ್ತಾರೆ.

P: ಹೌದು, ಆದರೆ ಅದು ಬರವಣಿಗೆ ಅಲ್ಲವಲ್ಲ!

F: ಇದು ಏಕೆ ಬರವಣಿಗೆ ಎನಿಸಿಕೊಳ್ಳುವುದಿಲ್ಲ?

P: ಏಕೆಂದರೆ, ಮಕ್ಕಳು ತಾವು ಗೀಚಿರುವುದನ್ನು ಅಥವಾ ಚಿತ್ರ ಬಿಡಿಸಿರುವುದನ್ನು ಓದಬಹುದು. ಆದರೆ ಸ್ವಲ್ಪ ಸಮಯದ ನಂತರ ಅದೇ ಚಿತ್ರವನ್ನು ಮಕ್ಕಳಿಗೆ ತೋರಿಸಿ ಓದಲು ಹೇಳಿದರೆ, ಅವರು ಮೊದಲು ಹೇಳಿದ್ದಕ್ಕಿಂತ ಬೇರೆ ಏನೋ ಹೇಳಬಹುದು. ಇದನ್ನು 'ಚಿತ್ರ ಬಿಡಿಸುವುದು' ಎನ್ನುತ್ತೇವೆ. ಅದು ಬರವಣಿಗೆಯಲ್ಲ.

F: ಆದರೆ, ಅವರು ಚಿತ್ರ ಬಿಡಿಸುವಾಗ ಅವರು ಏನು ಮಾಡುತ್ತಿದ್ದಾರೆ ಎಂದು ಯೋಚಿಸಿದ್ದೀರಾ?

ಅವರು ಕೆಲವು ನಿರ್ದಿಷ್ಟ ಕಲ್ಪನೆಗಳನ್ನು ಚಿತ್ರದ ರೂಪದಲ್ಲಿ ಪ್ರತಿನಿಧಿಸುತ್ತಿರುತ್ತಾರೆ.

ಮೂರು ವರ್ಷದ ಮಗು ರಚಿಸಿರುವ ಈ ಚಿತ್ರವನ್ನು (ಚಿತ್ರ 2) ನೋಡಿ.

ಚಿತ್ರ 2



ಮಗು ಚಿತ್ರದಲ್ಲಿರುವ ಮೂರು ಆಕೃತಿಗಳನ್ನು ಬರೆದು ಹೀಗೆ ಹೇಳಿತು:
"ಮೊದಲನೆಯವ ಅಮಿನ್ನ, ಎರಡನೆಯವ ಬನ್ನಿ, ಮೂರನೆಯವ ಉದಯ್, ಎಲ್ಲರೂ "ಹುರ್ರೇ" ಅಂತ ಹೇಳುತ್ತಿದ್ದಾರೆ!! ನಿಶಾಳ ಎಲ್ಲಾ ಮಕ್ಕಳೂ ನಗುತ್ತಿದ್ದಾರೆ".

ಮಗುವು ನಿಜ ಜೀವನದ ಜನರನ್ನು ಮತ್ತು ಅವರ ಸಂತೋಷವನ್ನು ಚಿತ್ರದ ರೂಪದಲ್ಲಿ ಪ್ರತಿನಿಧಿಸಿದೆ. ಇದಕ್ಕೆ "ಸಂಕೇತೀಕರಣ" ಎನ್ನುವರು. ಇಲ್ಲಿ ಒಂದು ವಿಷಯವು, ಬೇರೆ ಇನ್ನೇನನ್ನೋ ಪ್ರತಿನಿಧಿಸುತ್ತದೆ.

ಉದಾಹರಣೆಗೆ, ಒಂದು ಮಗು, ನಾಯಿಯ ಚಿತ್ರ ಬರೆದಾಗ, ಚಿತ್ರವು ವಾಸ್ತವವಾಗಿ ನಾಯಿಯನ್ನು ಪ್ರತಿನಿಧಿಸುತ್ತದೆ, ಆದರೆ ಅದೇ ನಾಯಿಯಲ್ಲ.

ಈಗ ನಾವು ಇನ್ನೊಂದು ಚಿತ್ರವನ್ನು (ಚಿತ್ರ 3)

ಚಿತ್ರ 3



ಇದೇನೆಂದು ಆ ಚಿತ್ರ ಬರೆದಿರುವ ಮಗುವನ್ನು ಕೇಳಿದಾಗ, ಅದು ಡೈನಸಾರ್ ಎಂದು ಹೇಳಿತು. ಮಗು ಟಿ.ವಿ.ಯಲ್ಲಿ ಡೈನಸಾರನ್ನು ನೋಡಿದೆ, ಅದನ್ನೇ ತನ್ನ ಕರಿ ಹಲಗೆಯ (slate) ಮೇಲೆ ಬಿಡಿಸಿದೆ. ಮಗು ಬಿಡಿಸಿದ ಚಿತ್ರವು ಮಗು ಟಿ.ವಿ.ಯಲ್ಲಿ ನೋಡಿದ ಡೈನಸಾರ್‌ನ ಒಂದು ಪ್ರಾತಿನಿಧಿಕ ರೂಪವೇ ಹೊರತು ಅದೇ ಡೈನಸಾರ್ ಅಲ್ಲ. ಜೀವಂತ ಡೈನಸಾರ್ ಒಂದು ಕರಿ ಹಲಗೆ ಮೇಲೆ ಎರಡು ಆಯಾಮದ ಚಿತ್ರವಾಗಿ ರೂಪುಗೊಂಡಿದೆ. ಈ ಪ್ರಾಣಿಯ ಯಾವ ಅಂಶಗಳು ಮಗುವಿನಲ್ಲಿ ಆಸಕ್ತಿ ಮೂಡಿಸಿದೆ ಮತ್ತು ಮಗು ಅದನ್ನು ಎಷ್ಟು ಯಥಾರ್ಥವಾಗಿ ಗ್ರಹಿಸಿದೆ ಎನ್ನುವ ವಿಚಾರ ಆ ಮಗುವಿಗೇ ಪ್ರತ್ಯೇಕವಾಗಿದ್ದು, ವಿಶಿಷ್ಟವಾಗಿರುತ್ತದೆ. ಬೇರೊಂದು ಮಗು ಇದೇ ಡೈನಸಾರನ್ನು ಬೇರೆಯದೇ ರೀತಿಯಲ್ಲಿ ಬರೆಯಬಹುದು.

ಮಗು, ಚಿತ್ರಗಳ ಬದಲಿಗೆ ಅಕ್ಷರಗಳನ್ನು ಉಪಯೋಗಿಸಲು ಕಲಿಯುವ ಮುಂದಿನ ಹಂತವೇ "ಸಂಕೇತೀಕರಣ"ದ ಪ್ರಕ್ರಿಯೆ. ಅದನ್ನು ನಾವು "ಓದುವುದು" ಮತ್ತು "ಬರೆಯುವುದರ" ಕಲಿಕೆ ಎನ್ನುತ್ತೇವೆ. ಚಿತ್ರಗಳ ರಚನೆಯಲ್ಲಿ ವಿಭಿನ್ನತೆಯನ್ನು ಕಾಣಬಹುದಾದರೂ,,, ಬೇರೆ ಬೇರೆ ಮಕ್ಕಳು ಒಂದೇ ಅಕ್ಷರವನ್ನು ಬೇರೆ ಬೇರೆ ರೀತಿ ಬರೆಯಲು ಸಾಧ್ಯವಿಲ್ಲ. ಎಲ್ಲಾ ಮಕ್ಕಳೂ ಅಕ್ಷರಗಳ ಚಿನ್ಹೆಗಳನ್ನು ಒಂದೇ ರೀತಿಯಲ್ಲಿ ಓದಲು ಮತ್ತು ಬರೆಯಲು ಕಲಿಯಲೇಬೇಕು. ಆದ್ದರಿಂದಲೇ ಓದುವ ಮತ್ತು ಬರೆಯುವ ಕ್ರಿಯೆಯು ರೂಢಿಗತ ಚಿನ್ಹೆಯ ವ್ಯವಸ್ಥೆಗಳನ್ನು ಉಪಯೋಗಿಸುತ್ತದೆ. ಈ ವ್ಯವಸ್ಥೆಗಳು, ಆ ಲಿಪಿಯನ್ನು ಉಪಯೋಗಿಸುವವರೆಲ್ಲರೂ ಒಪ್ಪಿರುವಂತಹದ್ದಾಗಿದೆ.

ಆದರೆ ಚಿತ್ರ ಬಿಡಿಸುವುದರಲ್ಲಿ ಇರುವ ಹಾಗೆಯೇ ಓದುವುದು ಮತ್ತು ಬರೆಯುವುದು ಕೂಡ ಚಿನ್ಹೆಗಳಿಗೆ ಅರ್ಥವಿದೆ ಎನ್ನುವ ಒಳನೋಟವನ್ನು ಒಳಗೊಳ್ಳುತ್ತದೆ.

ಪ್ರತೀಕ ಚಿನ್ಹೆಗಳನ್ನು (logos) ಅಕ್ಷರಗಳ ಬದಲಾಗಿ ಬರಹದ ಮೂಲ ಘಟಕದಂತೆ ಉಪಯೋಗಿಸುವ ಬರವಣಿಗೆಯ ವ್ಯವಸ್ಥೆಗಳು ಪ್ರಪಂಚದಲ್ಲಿ ಕಂಡುಬರುತ್ತವೆ.

ಚಿತ್ರ 4[1]




ಮೇಲ್ಕಂಡ ಚಿತ್ರದಲ್ಲಿ ನೋಡಿದ ಹಾಗೆ, ಎರಡು ಕಾಲಿನ ಚಿನ್ಹೆ, "ಮನುಷ್ಯ"ನನ್ನು; ಎರಡು ಮನುಷ್ಯರ ಚಿನ್ಹೆ, "ಅನುಸರಿಸಿ" (follow) ಎನ್ನುವುದನ್ನು; ಮೂರು ಮನುಷ್ಯರ ಚಿನ್ಹೆ "ಗುಂಪು" ಎಂಬುದನ್ನು, ಕೈ ಚಾಚಿರುವ

[1] ಚಿತ್ರ ಮತ್ತು ವಿವರಣೆಯ ಉಲ್ಲೇಖ: https://www.forbes.com/sites/bruceupbin/2013/04/25/learn-to-read-chinese-ineight-minutes/#175ed4b31795

ಮನುಷ್ಯನ ಚಿನ್ಹೆಯು "ದೊಡ್ಡದು" ಎಂಬುದನ್ನು ಮತ್ತು ಬಾಯೊಳಗಿರುವ ಮನುಷ್ಯನ ಚಿನ್ಹೆಯು "ಕೈದಿ"ಯನ್ನು ಪ್ರತಿನಿಧಿಸುತ್ತದೆ.

ನಾವು ವರ್ಣಮಾಲೆಯನ್ನು (ಅಥವಾ ಇಂಗ್ಲೀಷ್ ಅಕ್ಷರಗಳನ್ನು) ನೋಡಿದರೆ ಅವುಗಳೂ ಸಹ ಸಂಕೇತಗಳಿಂದ ರೂಪಿಸಲ್ಪಟ್ಟಿವೆ ಎಂಬ ಅಂಶವನ್ನು ಗಮನಿಸಬಹುದು. ಈ ಸಂಕೇತಗಳು ಏನನ್ನು ಪ್ರತಿನಿಧಿಸುತ್ತವೆ? ಅವು ಮೌಖಿಕ ಭಾಷೆಯ ಕೆಲವು ನಿರ್ದಿಷ್ಟ ಶಬ್ದಗಳನ್ನು ಪ್ರತಿನಿಧಿಸುತ್ತವೆ! ನಾವು ಈ ಸಂಕೇತವನ್ನು (ಅಕ್ಷರ) ನೋಡಿದಾಗ, ಅದು ಒಂದು ಧ್ವನಿಯನ್ನು (sound) ಪ್ರತಿನಿಧಿಸುತ್ತದೆ ಎಂದು ತಿಳಿದಿರುತ್ತೇವೆ. ನಾವು ಈ ಧ್ವನಿಗಳನ್ನು ಒಟ್ಟುಗೂಡಿಸಿದಾಗ ನಮಗೆ ಪದಗಳು ಸಿಗುತ್ತವೆ, ಈ ಪದಗಳು ಪ್ರಪಂಚದಲ್ಲಿರುವ ಕಲ್ಪನೆಗಳನ್ನು ಪ್ರತಿನಿಧಿಸುತ್ತವೆ.

ಆದ್ದರಿಂದ ಮಾತನಾಡುವುದು, ಚಿತ್ರ ಬಿಡಿಸುವುದು, ಓದುವುದು ಮತ್ತು ಬರೆಯುವುದು - ಇವೆಲ್ಲವುಗಳ ಕಲಿಯುವಿಕೆಯಲ್ಲಿನ ಮುಖ್ಯ ವಿಷಯ ಏನೆಂದರೆ ಇವೆಲ್ಲವೂ ಸಂಕೇತಗಳ ಕಲಿಯುವಿಕೆಯನ್ನು ಒಳಗೊಂಡಿವೆ. ಒಂದು ಮಗು ಭಾಷೆಯನ್ನು ಕಲಿಯುತ್ತಿದ್ದಂತೆಯೇ, ಸಂಕೇತಗಳನ್ನು ಅರ್ಥದ ಸಂವಹನೆಗಾಗಿ ಉಪಯೋಗಿಸಬಹುದು ಎನ್ನುವುದನ್ನು ಕಲಿಯುತ್ತದೆ.

ಚಿಕ್ಕ ಮಕ್ಕಳು ಶಾಲಾ ಪೂರ್ವ ತರಗತಿಗಳಲ್ಲಿ ಮೊದಲು ಓದಲು ಮತ್ತು ಬರೆಯಲು ಕಲಿಯುವುದನ್ನು ಶುರು ಮಾಡಿದಾಗ "ತುಂಬಾ ಮಾತನಾಡುತ್ತಾರೆ!" ಎನ್ನುವುದನ್ನು ಶಿಕ್ಷಣ ತಜ್ಞರು ಗಮನಿಸಿರುವ ಸಂಗತಿಯು ಒಂದು ಅತ್ಯಂತ ಆಸಕ್ತಿದಾಯಕ ಅಂಶವಾಗಿದೆ. ಯಾವುದಾದರೊಂದು ವಿಷಯವನ್ನು ಬರೆಯಲು ಅಥವಾ ಅಭಿವ್ಯಕ್ತಿಸಲು ಪ್ರಯತ್ನಿಸುತ್ತಿರುವಾಗ, ಮಕ್ಕಳು ಕೈಗಳ ಸನ್ನೆಯನ್ನು, ಶಬ್ದಗಳನ್ನು ಮತ್ತು ತಮ್ಮ ವಿಚಾರಗಳ ಅಭಿನಯವನ್ನು ಮಾಡುತ್ತಿರುತ್ತಾರೆ! ಮಕ್ಕಳು ಚಿತ್ರ ಬಿಡಿಸುವುದು ಅಥವಾ ಬರವಣಿಗೆಯನ್ನು, ಅರ್ಥವನ್ನು ಸೃಜಿಸುವ ಎರಡು ಪ್ರತ್ಯೇಕ ದಾರಿಗಳೆಂದು ಪರಿಗಣಿಸುವುದಿಲ್ಲ, ಬದಲಾಗಿ ಇವೆರಡರ ಜೊತೆ ಮಾತು, ಹಾವಭಾವ, ಇತ್ಯಾದಿಯನ್ನು ಇದಕ್ಕೆ ಪೂರಕವಾಗಿ ಬಳಸಿಕೊಳ್ಳುತ್ತಾರೆ. ಆದ್ದರಿಂದ, ಚಿಕ್ಕ ಮಕ್ಕಳು ತಮಗೆ ತಿಳಿದಿರುವ ಎಲ್ಲಾ ರೀತಿಯ ಸಂಕೇತ ವ್ಯವಸ್ಥೆಗಳನ್ನು ಏಕಕಾಲಿಕವಾಗಿ ಬಳಸುತ್ತಾರೆ – ಮೊದಲು ಆಲಿಸುವುದು, ನಂತರ ಮಾತನಾಡುವುದು, ಓದುವುದು, ಕೊನೆಯದಾಗಿ ಬರೆಯುವುದು ಎಂಬ ಅನುಕ್ರಮವಿರುವುದಿಲ್ಲ.

ಆದ್ದರಿಂದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಇವುಗಳನ್ನು ಕಲಿಸುವ ವಿಚಾರಕ್ಕೆ ಬಂದಾಗ ನಾವು ಇದನ್ನು ಅನುಕ್ರಮವಾಗಿ ಏಕೆ ಕಲಿಸಬೇಕು? ನಾವು ಬಹಳ ಸಲ ಮಗು ಕರಾರುವಾಕ್ಕಾಗಿ ಬರೆಯಬೇಕೆಂಬುದರ ಬಗೆಗೆ ಕಾಳಜಿ ಮಾಡುತ್ತೇವೆ. ಆದರೆ ಚಿತ್ರ ಬಿಡಿಸುವುದು/ಗೀಚುವಿಕೆಯ ಹಂತದಿಂದ ರೂಢಿಗತ ಬರವಣಿಗೆಯೆಡೆಗಿನ ಸಂಚಲನೆಯು ಸಂಕೇತಗಳನ್ನು ಕಲಿಯುವ ಪ್ರಕ್ರಿಯೆಯಾಗಿದ್ದು, ಹೆಚ್ಚಿನ ಸಮಯವನ್ನು ತೆಗೆದುಕೊಳ್ಳುವಂತಹುದಾಗಿದೆ ಮತ್ತು ಇದರ ನಡುವೆ ಅನೇಕ ಹಂತಗಳಿದ್ದು, ಅವುಗಳಲ್ಲಿ ಚಿತ್ರಗಳು ಮತ್ತು ರೂಢಿಗತ ಸಂಕೇತಗಳು ಬೆರಕೆಯಾಗುವ ಸಂಭವವೂ ಇರುತ್ತದೆ. . . ಆದ್ದರಿಂದ ತಪ್ಪಿಲ್ಲದಂತೆ ಕಾಗುಣಿತವನ್ನು ಬರೆಯುವುದನ್ನು ಮಕ್ಕಳಿಂದ ನಾವು ನಿರೀಕ್ಷಿಸುವ ಮೊದಲು, ಆ ಸಮಯ ಮತ್ತು ಅವಕಾಶವನ್ನು ಕೊಡಬೇಕಾಗುತ್ತದೆ.

ಚಿಕ್ಕಮಕ್ಕಳು ಸಂಕೇತೀಕರಣದ ಪ್ರಕ್ರಿಯೆಯಲ್ಲಿ ಪರಿಣತಿ ಪಡೆಯಲು ಸಹಾಯ ಮಾಡಬೇಕೆಂದರೆ, ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವ ನಾಲ್ಕೂ ಚಟುವಟಿಕೆಗಳಲ್ಲೂ ತೊಡಗಿಕೊಳ್ಳಲು ಶಾಲಾ ಕೊಠಡಿಯಲ್ಲಿ ಅನುಕೂಲವನ್ನು ಕಲ್ಪಿಸಬೇಕು ಮತ್ತು ಅವರಿಗೆ ಮಾತನಾಡಲು, ಚಿತ್ರ ಬಿಡಿಸಲು, ಅಭಿನಯಿಸಲು ಅನುಮತಿಸಬೇಕು. ಚಿಕ್ಕ ಮಕ್ಕಳು ಭಾಷೆಯ ಬಗ್ಗೆ ಈ ಕೆಳಗಿನವುಗಳನ್ನು ಕಲಿಯಬೇಕೆಂದು ನಾವು ಬಯಸುತ್ತೇವೆ:

–ನಾನು ಯಾವುದರ ಬಗ್ಗೆ ಆಲೋಚಿಸಬಲ್ಲೆನೋ ಅದರ ಬಗ್ಗೆ ಮಾತನಾಡಬಲ್ಲೆ.

–ನಾನು ಯಾವುದರ ಬಗ್ಗೆ ಮಾತನಾಡಬಲ್ಲೆನೋ ಅದನ್ನು ಬರೆಯಬಲ್ಲೆ.

–ನಾನು ಏನನ್ನು ಬರೆಯಬಲ್ಲೆನೋ ಅದನ್ನು ಓದಬಲ್ಲೆ.

–ನಾನು ಬರೆದದ್ದನ್ನು ನಾನು ಓದಬಲ್ಲೆ ಮತ್ತು ಇತರರು ಬರೆದದ್ದನ್ನೂ ಓದಬಲ್ಲೆ.

–ಯಾವುದನ್ನು ನಾವು ಓದಿ ಬರೆದು ಮಾಡಬಲ್ಲೆವೋ, ನಾವು ಅದರ ಬಗ್ಗೆ ಮಾತನಾಡಬಲ್ಲೆವು.

–ನಾವು ಯಾವುದರ ಬಗ್ಗೆ ಮಾತನಾಡಬಲ್ಲೆವೋ ಅದರ ಬಗ್ಗೆ ಆಲೋಚಿಸಬಲ್ಲೆ.

L-S-R-W (ಆಲಿಸುವುದು (L), ಮಾತನಾಡುವುದು (S), ಓದುವುದು (R) ಮತ್ತು ಬರೆಯುವುದು) ಚಟುವಟಿಕೆಗಳು ಏಕಕಾಲಕ್ಕೆ ಮತ್ತು ಅಡಚಣೆ ಇಲ್ಲದಂತೆ ಸಾಗಲು "ಭಾಷಾ ಅನುಭವ ಆಧಾರಿತ ವಿಧಾನ"ವು ಒಂದು ಅದ್ಭುತವಾದ ಮಾರ್ಗವಾಗಿದೆ. ಚರ್ಚಿಸುವ, ಕಥೆಗಳ ಮೂಲಕ ವಿವರಿಸಿ/ನಿದರ್ಶಿಸುವ ಮತ್ತು ಓದು, ಮರು-ಓದುಗಳನ್ನು ಒಟ್ಟಾಗಿ ಕೈಗೊಳ್ಳುವ ಸರ್ವೇಸಾಮಾನ್ಯ ಅನುಭವಗಳಲ್ಲಿ ಮಕ್ಕಳು ತೊಡಗಿಕೊಳ್ಳುತ್ತಾರೆ. ಈ ರೀತಿಯಾಗಿ, ಓದುವ ಪ್ರಕ್ರಿಯೆಯನ್ನು ಮಾತನಾಡುವ, ಆಲಿಸುವ, ಬರೆಯುವ ಮತ್ತು ಚಿತ್ರ ಬಿಡಿಸುವ ಕ್ರಿಯೆಗಳ ಒಂದು ಸಹಜ ಆಯಾಮವೆಂಬ ನಿಟ್ಟಿನಲ್ಲಿ ಕಲಿಸಲಾಗುವುದು.

**ಪರಾಮರ್ಶನಾ ಗ್ರಂಥಗಳು:**


Dyson, A. H. (1990). Symbol makers, symbol weavers: How children link play, pictures andprint. *Young Children, 45* (2), 50-57.

Madison, J. P. (1971). The Language Experience Approach to teaching reading. Elementary English, 48 (6), 682-688.

Sulzby, E., & Teale, W. H. (Eds.). (1988). *Emergent literacy: Writing and reading*. Ablex Publishing Corporation.

Wells, G. (2009). *The meaning makers: Learning to talk and talking to learn*. Salisbury, UK: MPG Books



ಲೇಖಕರು:

ನಿಶಾ ಬುಟೋಲಿಯಾ

ಶೈಲಜ ಮೆನನ್

